ಜಿಲ್ಲಾ ಅನುಷ್ಠಾನ ಸಮಿತಿ:

1) ಆಯಾಯ ಜಿಲ್ಲೆಗಳ ಜಿಲ್ಲಾಧಿಕಾರಿಗಳು - ಅಧ್ಯಕ್ಷರು

2) ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಗಳು - ಸದಸ್ಯ ಕಾರ್ಯದರ್ಶಿ.

ಈ ಯೋಜನೆಯನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಸಮಿತಿಯ ಅಧ್ಯಕ್ಷರಿಗೆ ಅವಶ್ಯವಿದ್ದಲ್ಲಿ ಹೆಚ್ಚುವರಿ ಸದಸ್ಯರನ್ನು ನೇಮಿಸಲು ಅಧಿಕಾರ ನೀಡಲಾಗಿದೆ. ವಿಶೇಷವಾಗಿ ಪ್ರಸ್ತಾವನೆಯಲ್ಲಿ ವಿವರಿಸಿದ ತರಬೇತಿಗಳಿಗೆ ಸಂಬಂಧಿಸಿದಂತೆ ಆಯಾಯಾ ತರಬೇತಿಗಳ ತಜ್ಞರು ಅಥವಾ ಆಯಾಯಾ ತರಬೇತಿಗಳಿಗೆ ನೀಡುವ ಸಂಸ್ಥೆಯ ಮುಖ್ಯಸ್ಥರಿಗೆ ಸಂದರ್ಭಾನುಸಾರ ಅನುಷ್ಠಾನ ಸಮಿತಿಯ ಸದಸ್ಯರಾಗಿ ನೇಮಿಸಿಕೊಳ್ಳಬಹುದಾಗಿದೆ.

ಈ ತರಬೇತಿಗಳ ವೆಚ್ಚವನ್ನು 2006-07ನೇ ಸಾಲಿನ ಆರ್ಥಿಕ ವರ್ಷದ ಆಯವ್ಯಯ ಲೆಕ್ಕಶೀರ್ಷಿಕೆ 2225-03-277-2-58 ರಾಜ್ಯವಲಯ ಯೋಜನೆಯಡಿ ಒದಗಿಸಿರುವ ರೂ.500ಲಕ್ಷಗಳಿಂದ ಭರಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 320 ವೆಚ್ಚ 3/06 ದಿನಾಂಕ:27-07-2006ರಲ್ಲಿ ನೀಡಿರುವ ಸಹಮತಿಯನುಸಾರ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಕೆ.ಎ. ಜಾವಿದ್

ಪಿ.ಆರ್. 1332 ಸರ್ಕಾರದ ಅಧೀನ ಕಾರ್ಯದರ್ಶಿ-3(ಪ್ರ), ಸಮಾಜ ಕಲ್ಯಾಣ ಇಲಾಖೆ.

ವಿಷಯ: ಸರ್ಕಾರಿ ಅಲ್ಪಸಂಖ್ಯಾತರ ಶಾಲೆಗಳಿಗೆ ಕಲಿಕೆ ಮತ್ತು ಭೋಧನಾ ಸಾಮಗ್ರಿ ಪೂರೈಕೆ ಮಾಡುವ ಯೋಜನೆ.

ಓದಲಾಗಿದೆ: 1) ನಿರ್ದೇಶಕರು, ಅಲ್ಪಸಂಖ್ಯಾತರ ಇಲಾಖೆರವರ ಪತ್ರ ಸಂಖ್ಯೆ:ಅಸಂನಿ:ಭೊಕಸ:ಸಿಆರ್-15:2006-07 ದಿನಾಂಕ:02-05-2006.

2) ದಿನಾಂಕ:02-05-2006ರಂದು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಸಭೆ.

ಪ್ರಸ್ತಾವನೆ:

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಲ್ಪಸಂಖ್ಯಾತರ ಇಲಾಖೆ ಇವರು ಸರ್ಕಾರದ ಮಾನ್ಯತೆ ಪಡೆದ ಅಲ್ಪಸಂಖ್ಯಾತರ ಶಾಲೆಗಳಿಗೆ ಕಲಿಕೆ ಮತ್ತು ಭೋಧನಾ ಸಾಮಗ್ರಿ ಪೂರೈಕೆ ಮಾಡುವ ಹೊಸ ಯೋಜನೆಯನ್ನು ಜಾರಿಗೊಳಿಸಲು ಸರ್ಕಾರವನ್ನು ಕೋರಿರುತ್ತಾರೆ ಹಾಗೂ ಮೇಲೆ (2)ರಲ್ಲಿ ಓದಲಾದ ಸಭೆಯಲ್ಲಿ ಅಲ್ಪಸಂಖ್ಯಾತರ ಅಭಿವೃದ್ಧಿಗಾಗಿ ಹೊಸ ಯೋಜನೆಗಳನ್ನು ರೂಪಿಸಿ ಜಾರಿಗೊಳಿಸುವ ನಿರ್ಣಯದನುಸಾರ ಸರ್ಕಾರದ ಮಾನ್ಯತೆ ಪಡೆದ ಅಲ್ಪಸಂಖ್ಯಾತರ ಶಾಲೆಗಳಿಗೆ ಕಲಿಕೆ ಸಾಮರ್ಥ್ಯವನ್ನು ಹೆಚ್ಚಿಸಲು ಮತ್ತು ಭೋಧಕರ ಭೋಧನಾ ಸಾಮರ್ಥ್ಯವನ್ನು ಬೋಧನ ಪರಿಕರ ಮೂಲಕ ಹೆಚ್ಚಿಸಿ ಅಲ್ಪಸಂಖ್ಯಾತರ ಸಮುದಾಯದ ಮಕ್ಕಳ ಶಿಕ್ಷಣ ಮಟ್ಟವನ್ನು ಉತ್ತಮಗೊಳಿಸಲು ನೆರವಾಗಲು ಸರ್ಕಾರವು ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

ಸರ್ಕಾರಿ ಆದೇಶ ಸಂಖ್ಯೆ:ಸಕಇ 87 ಅಸಂಯೋ 2006(4), ಬೆಂಗಳೂರು, ದಿನಾಂಕ: 9ನೇ ಆಗಸ್ಟ್ 2006

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದೆ. ಸರ್ಕಾರದ ಮಾನ್ಯತೆ ಪಡೆದ ಅಲ್ಪಸಂಖ್ಯಾತರ ಶಾಲೆಗಳ ಕಲಿಕೆ ಗುಣಮಟ್ಟ ಹೆಚ್ಚಿಸಲು ಹಾಗೂ ಕಲಿಕೆಗೆ ಸಂಬಂಧಪಟ್ಟ ಸಾಮಗ್ರಿಗಳನ್ನು ಒದಗಿಸಲು ಮತ್ತು ಬೋಧಕರ ಬೋಧನಾ ಸಾಮರ್ಥ್ಯವನ್ನು ಬೋಧನಾ ಪರಿಕರ ಮೂಲಕ ಹೆಚ್ಚಿಸಿ, ಅಲ್ಪಸಂಖ್ಯಾತರ ಮಕ್ಕಳನ್ನು ಉತ್ತಮ ಶಿಕ್ಷಣ ಪಡೆಯುವುದರಲ್ಲಿ ನೆರವಾಗಲು ಸರ್ಕಾರದ ಮಾನ್ಯತೆ ಪಡೆದ ಅಲ್ಪಸಂಖ್ಯಾತರ ಪ್ರತಿ ಶಿಕ್ಷಣ ಸಂಸ್ಥೆಗೆ ರೂ.10,000/-(ರೂ.ಹತ್ತು ಸಾವಿರ)ಗಳು ಮೀರದಂತೆ ಕಲಿಕೆ ಮತ್ತು ಬೋಧನಾ ಸಾಮಗ್ರಿ ಪೂರೈಕೆ ಮಾಡಲು ಸದರಿ ಯೋಜನೆಗೆ ಅನುಮತಿ ನೀಡಿ, ಈ ಆದೇಶ ಹೊರಡಿಸಿದೆ.

ಸದರಿ ಯೋಜನೆಯನ್ನು ಈ ಕೆಳಕಂಡ ಅನುಷ್ಠಾನ ಸಮಿತಿಯಿಂದ ಅನುಷ್ಠಾನಗೊಳಿಸತಕ್ಕದ್ದು. ಪ್ರಸಕ್ತ ವರ್ಷ ಪ್ರತಿ ಜಿಲ್ಲೆಯಲ್ಲಿ ಸದರಿ ಯೋಜನೆಯಡಿಯಲ್ಲಿ ನೆರವು ನೀಡಬಹುದಾದ ಶಾಲೆಗಳ ತಾತ್ಕಾಲಿಕ ಸಂಖ್ಯೆಯನ್ನು ಅನುಬಂಧ-1ರಲ್ಲಿ ತೋರಿಸಲಾಗಿದೆ. ಅನುಷ್ಠಾನ ಸಮಿತಿಯು ಅವಶ್ಯವಿದ್ದ ಕ್ರಮವನ್ನು ತೆಗೆದುಕೊಂಡು ಆಯಾ ಜಿಲ್ಲೆಯ ಶಾಲಾ ಪಟ್ಟಿಯನ್ನು ತಯಾರಿಸಿ ನಿರ್ದೇಶಕರು, ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ಇವರಿಗೆ ಸಲ್ಲಿಸತಕ್ಕದ್ದು. ಅವಶ್ಯವಿದ್ದ ಸಾಮಗ್ರಿಗಳನ್ನು ಪಡೆಯುವ ಹಾಗೂ ವಿತರಿಸುವ ಕುರಿತು ಸರ್ಕಾರದ ನಿರ್ದೇಶನಗಳು/ಸೂಚನೆಗಳು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಈ ಪ್ರಸ್ತಾವನೆಯ ವೆಚ್ಚವನ್ನು 2006-07ನೇ ಸಾಲಿನ ಆರ್ಥಿಕ ವರ್ಷದ ಆಯವ್ಯಯದ ಲೆಕ್ಕ ಶೀರ್ಷಿಕೆ 2225-03-277-2-59ರಾಜ್ಯವಲಯ ಯೋಜನೆಯಡಿ ಒದಗಿಸಿರುವ ಅನುದಾನದ ಮೊತ್ತ ರೂ.100.00ಲಕ್ಷಗಳಲ್ಲಿ ಭರಿಸತಕ್ಕದ್ದು.

ಅನುದಾನ ಪಡೆಯುವ ವಿದ್ಯಾ ಸಂಸ್ಥೆಯು ಅಲ್ಪಸಂಖ್ಯಾತರ ಸಮುದಾಯಕ್ಕೆ ಸೇರಿದ್ದು, ಸರ್ಕಾರದ ಮಾನ್ಯತೆ ಪಡೆದಿರಬೇಕು.

ಅನುಷ್ಠಾನ ಸಮಿತಿ

1) ಆಯಾಯ ಜಿಲ್ಲೆಯ ಜಿಲ್ಲಾಧಿಕಾರಿಗಳು - ಅಧ್ಯಕ್ಷರು

2) ಅಯಾಯ ಜಿಲ್ಲೆಯ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ (ಡಿ.ಡಿ.ಪಿ.ಐ.) - ಸದಸ್ಯ

3) ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತ ಇಲಾಖೆಯ ಜಿಲ್ಲಾ ಅಧಿಕಾರಿ. - ಸದಸ್ಯ ಕಾರ್ಯದರ್ಶಿ.

ಈ ಯೋಜನೆಯನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಸಮಿತಿಯ ಅಧ್ಯಕ್ಷರಿಗೆ ಅವಶ್ಯವಿದ್ದಲ್ಲಿ ಹೆಚ್ಚುವರಿ ಸದಸ್ಯರನ್ನು ನೇಮಿಸಲು ಅಧಿಕಾರ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ 320 ವೆಚ್ಚ-3/06 ದಿನಾಂಕ:27-07-2006ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಕೆ.ಎ. ಜಾವಿದ್

ಪಿ.ಆರ್. 1333 ಸರ್ಕಾರದ ಅಧೀನ ಕಾರ್ಯದರ್ಶಿ-3(ಪ್ರ), ಸಮಾಜ ಕಲ್ಯಾಣ ಇಲಾಖೆ.

ವಿಷಯ: ಭೂ ರಹಿತ ಮತೀಯ ಅಲ್ಪಸಂಖ್ಯಾತರಿಗೆ ಭೂಮಿ ಖರೀದಿಸುವ ಯೋಜನೆ.

ಓದಲಾಗಿದೆ: 1) ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತದ ಟಿಪ್ಪಣಿ ದಿನಾಂಕ:03-05-2006.

2) ದಿನಾಂಕ:02-06-2006ರಂದು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಸಭೆ ನಿರ್ಣಯ.

ಪ್ರಸ್ತಾವನೆ:

ಮೇಲೆ (1)ರಲ್ಲಿ ಓದಲಾದ ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮದ ಟಿಪ್ಪಣಿಯಲ್ಲಿ ಕೋರಿದನ್ವಯ, ಹಾಗೂ ಮೇಲೆ (2)ರಲ್ಲಿ ಓದಲಾದ ಸಭೆಯಲ್ಲಿ ಮತೀಯ ಅಲ್ಪಸಂಖ್ಯಾತರ ಅಭಿವೃದ್ಧಿಗಾಗಿ ಹೊಸ ಯೋಜನೆಗಳನ್ನು ರೂಪಿಸಿ ಜಾರಿಗೊಳಿಸಲು ಹಾಗೂ ಭೂ ಖರೀದಿ ಘಟಕ ವೆಚ್ಚವು ಬಹಳ ಕಡಿಮೆ ಇರುವುದರಿಂದ ಮಾರುಕಟ್ಟೆ ಬೆಲೆಗೆ ಜಮೀನನ್ನು ಖರೀದಿಸಲು ಕಷ್ಟಕರವಾಗುವುದರಿಂದ ಇದನ್ನು ಕಂದಾಯ ಇಲಾಖೆಯ ಮಾರ್ಗಸೂಚಿ ಬೆಲೆಗೆ ಸರಿಸಮಾನ ಮಾಡಿ ಖರೀದಿಯನ್ನು ಸುಲಭಗೊಳಿಸಲು ನಿರ್ಧರಿಸಲಾಯಿತು. ಈ ಹಿನ್ನೆಲೆಯಲ್ಲಿ ಈ ಯೋಜನೆಯಡಿ ಭೂ ರಹಿತ ಅಲ್ಪಸಂಖ್ಯಾತರಿಗೆ ಭೂಮಿಯನ್ನು ಖರೀದಿಸಲು ಶೇ.50ರಷ್ಟು ಸಹಾಯ ಧನ ಮತ್ತು ಶೇ.50ರಷ್ಟು ಸಾಲದ ರೂಪದಲ್ಲಿ ಒಂದು ಎಕರೆ ಖುಷ್ಕಿ ಜಮೀನಿಗೆ ರೂ.30,000/- ಗಳಂತೆ ಎರಡು ಎಕರೆ ಖುಷ್ಕಿ ಜಮೀನಿಗೆ ರೂ.60,000/-ಗಳಂತೆ ಅಥವಾ ಒಂದೇ ಎಕರೆ ತರಿ ಜಮೀನಿಗೆ ರೂ.60,000/-ಗಳಂತೆ ಶೇ.6ರ ಬಡ್ಡಿ ದರದಲ್ಲಿ ನೀಡಲು ಈ ಕೆಳಕಂಡ ಆದೇಶ.

ಸರ್ಕಾರದ ಆದೇಶ ಸಂಖ್ಯೆ:ಸಕಇ 87 ಅಸಂಯೋ(1) 2006, ಬೆಂಗಳೂರು,ದಿನಾಂಕ: 9ನೇ ಆಗಸ್ಟ್ 2006

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದೆ. ಭೂ ರಹಿತ ಅಲ್ಪಸಂಖ್ಯಾತರಿಗೆ ಕೆಳಕಂಡ ಷರತ್ತುಗಳನ್ನೊಳಗೊಂಡ ಈ ಯೋಜನೆಯಡಿ ಭೂ ರಹಿತ ಅಲ್ಪಸಂಖ್ಯಾತರಿಗೆ ಭೂಮಿಯನ್ನು ಖರೀದಿಸಲು ಶೇ.50ರಷ್ಟು ಸಹಾಯ ಧನ ಮತ್ತು ಶೇ.50ರಷ್ಟು ಸಾಲದ ರೂಪದಲ್ಲಿ ಒಂದು ಎಕರೆ ಖುಷ್ಕಿ ಜಮೀನಿಗೆ ರೂ.30,000/- ಗಳಂತೆ ಎರಡು ಎಕರೆ ಖುಷ್ಕಿ ಜಮೀನಿಗೆ ರೂ.60,000/-ಗಳಂತೆ ಅಥವಾ ಒಂದೇ ಎಕರೆ ತರಿ ಜಮೀನಿಗೆ ರೂ.60,000/-ಗಳಂತೆ ಶೇ.6ರ ಬಡ್ಡಿ ದರದಲ್ಲಿ ನೀಡಲು ಅಥವಾ ಘಟಕ ವೆಚ್ಚವನ್ನು ರಾಜ್ಯದ ಪ್ರತಿಯೊಂದು ಹಳ್ಳಿಗೆ ನೊಂದಣಿ ಇಲಾಖೆ ನಿಗದಿಪಡಿಸಿರುವ ಮಾರ್ಗಸೂಚಿ ಬೆಲೆಗೆ ಜಮೀನನ್ನು ಖರೀದಿಸಲು ಈ ಮೂಲಕ ಆದೇಶಿಸಿದೆ.

ಈ ಪ್ರಸ್ತಾವನೆಯ ವೆಚ್ಚವನ್ನು 2006-07ನೇ ಆರ್ಥಿಕ ವರ್ಷದಲ್ಲಿ ಈ ಯೋಜನೆಗೆ ಒದಗಿಸಲಾಗಿರುವ ಸಹಾಯಧನ ಲೆಕ್ಕ ಶೀರ್ಷಿಕೆ 2225-03-102-3-08(ಯೋಜನೆ)ರಡಿಯಲ್ಲಿ ಒದಗಿಸಿರುವ ರೂಪಾಯಿ ಎರಡು ಕೋಟಿಗಳಿಂದ ಭರಿಸುವುದು.

ಷರತ್ತುಗಳು:

1) ಅರ್ಜಿದಾರನು ಮತೀಯ ಅಲ್ಪಸಂಖ್ಯಾತನಾಗಿದ್ದು ಭೂರಹಿತನಾಗಿರಬೇಕು.
2) ಅರ್ಜಿದಾರನು ಜಮೀನಿಗೆ ಸಂಬಂಧಪಟ್ಟ ಮೂಲ ದಾಖಲಾತಿಗಳನ್ನು ಒದಗಿಸಬೇಕು. ಖರೀದಿಸಲ್ಪಡುವ ಜಮೀನು ಯಾವುದೇ ಋಣಭಾರದಿಂದ ಮುಕ್ತವಾಗಿರಬೇಕು. ಪ್ರಸ್ತಾಪಿತ ಜಮೀನಿನ ಮಾರಾಟದ ವಹಿವಾಟು ಪ್ರಚಲಿತದಲ್ಲಿರುವ ಯಾವುದೇ ಕಾನೂನಿನ ವಿರುದ್ಧವಿರಬಾರದು ಹಾಗೂ ಈ ವಹಿವಾಟು ಯಾವುದೇ ಕಾನೂನನ್ನು ಉಲ್ಲಂಘಿಸಬಾರದು.
3) ಫಲಾನುಭಾವಿಯು ಈ ಯೋಜನೆಯಡಿಯಲ್ಲಿ ಖರೀದಿಸಿದ ಜಮೀನನ್ನು ಖರೀದಿಸಿದ ದಿನಾಂಕದಿಂದ 10 ವರ್ಷಗಳ ಅವಧಿಯತನಕ ಪರಭಾರೆ ಮಾಡಕೂಡದು.
4) ಈ ಯೋಜನೆಯಡಿ ಖರೀದಿಸದ ಜಮೀನಿನ ಕ್ರಯ ಪತ್ರದಲ್ಲಿ ಜಮೀನನ್ನು ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮಕ್ಕೆ ಒತ್ತೆ ಇಡತಕ್ಕದ್ದು. ಅದರಂತೆ ಜಮೀನಿನ ಪಹಣಿಯ ಕಾಲಂ 9ರಲ್ಲಿ ನಿಗಮದ ಹೆಸರಿಗೆ ಅಡಮಾನ ಮಾಡಿರುವ ಬಗ್ಗೆ ನಮೂದಿಸತಕ್ಕದ್ದು.
5) ಸದರಿ ಯೋಜನೆಯಡಿಯಲ್ಲಿ ಅಲ್ಪಸಂಖ್ಯಾತರ ಜಮೀನನ್ನು ಖರೀದಿಸುವ ಅವಕಾಶವಿರುವುದಿಲ್ಲ.
6) ಈ ಯೋಜನೆಯಡಿ ಜಮೀನು ಖರೀದಿಸಲು ಒದಗಿಸಿರುವ ಸಾಲದ ಬಡ್ಡಿಯನ್ನು ಜಮೀನಿನ ಸ್ವಾಧೀನದ ಆರು ತಿಂಗಳ ನಂತರ ಲೆಕ್ಕ ಹಾಕಬಹುದಾಗಿದೆ.
7) ಸಮಿತಿಯ ಸದಸ್ಯ ಕಾರ್ಯದರ್ಶಿಯು ಜಮೀನಿನ ದಾಖಲಾತಿಗಳನ್ನು ಪರಿಶೀಲಿಸಿ ಪ್ರತಿಯೊಂದು ದಾಖಲಾತಿಯು ಋಣ ಮುಕ್ತವಾಗಿದ್ದು, ಯಾವುದೇ ಅಡಮಾನಕ್ಕೆ ಒಳಪಟ್ಟಿರುವುದಿಲ್ಲ ಎಂಬ ಅಂಶವನ್ನು ಖಚಿತಪಡಿಸಿಕೊಳ್ಳಬೇಕು.

ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಈ ಕೆಳಕಂಡ ಸಮಿತಿಯನ್ನು ಆಯಾ ಜಿಲ್ಲೆಗಳಲ್ಲಿ ರಚಿಸಲ್ಪಡಬೇಕಾಗಿದೆ ಹಾಗೂ ಈ ಯೋಜನೆಯ ಅನುಷ್ಠಾನ ಮತ್ತು ಮೇಲುಸ್ತುವಾರಿಯು ಈ ಸಮಿತಿಯದ್ದಾಗಿರುತ್ತದೆ.

ಸಮಿತಿ:

1) ಜಿಲ್ಲಾಧಿಕಾರಿ - ಅಧ್ಯಕ್ಷರು (ಚೇರ್‌ಮೆನ್)
2) ತಾಲ್ಲೂಕಿನ ತಹಸೀಲ್ದಾರ್- ಸದಸ್ಯ
3) ಆಯಾಯ ಜಿಲ್ಲೆಯ ಜಿಲ್ಲಾ ವ್ಯವಸ್ಥಾಪಕರು, ಕರ್ನಾಟಕ ಅಭಿವೃದ್ಧಿ ನಿಗಮ ನಿಯಮಿತ - ಸದಸ್ಯ ಕಾರ್ಯದರ್ಶಿ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 320 ವೆಚ್ಚ 3/06 ದಿನಾಂಕ:27-07-2006ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಕೆ.ಎ. ಜಾವಿದ್

ಸರ್ಕಾರದ ಅಧೀನ ಕಾರ್ಯದರ್ಶಿ-3(ಪ್ರ), ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 1336

ವಿಷಯ: ಮತೀಯ ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸವನ್ನು ಮುಂದುವರೆಸಲು ಉತ್ತೇಜನವನ್ನು ನೀಡುವ ಪ್ರೋತ್ಸಾಹ ಧನದ ಯೋಜನೆ.

ಓದಲಾಗಿದೆ: 1) ನಿರ್ದೇಶಕರು, ಅಲ್ಪಸಂಖ್ಯಾತರ ಇಲಾಖೆ ಇವರ ಏಕ ಕಡತ ಸಂಖ್ಯೆ:ಅಸಂನಿ/ಹೊಸಕಾರ್ಯಕ್ರಮ/ಸಿಆರ್-22/2006-07 ದಿನಾಂಕ:02-05-2006.

2) ದಿನಾಂಕ: 02-05-2006ರಂದು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಸಭೆ.

ಪ್ರಸ್ತಾವನೆ:

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಲ್ಪಸಂಖ್ಯಾತರ ಇಲಾಖೆ ಇವರು ಮತೀಯ ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ಉತ್ತೇಜನ ನೀಡಲು ಪ್ರೋತ್ಸಾಹ ಧನ ನೀಡುವ ಹೊಸ ಯೋಜನೆಯನ್ನು ಜಾರಿಗೊಳಿಸಲು ಸರ್ಕಾರವನ್ನು ಕೋರಿರುತ್ತಾರೆ. ಮೇಲೆ ಓದಲಾದ (2)ರ ಸಭೆಯಲ್ಲಿ ಮತೀಯ ಅಲ್ಪಸಂಖ್ಯಾತರ ಅಭಿವೃದ್ಧಿಗಾಗಿ ಹೊಸ ಯೋಜನೆಗಳನ್ನು ರೂಪಿಸಿ ಜಾರಿಗೊಳಿಸಲು ನಿರ್ಧರಿಸಲಾಯಿತು. ಈ ನಿರ್ಧಾರದನುಸಾರ ಅಲ್ಪಸಂಖ್ಯಾತರ ಸಮುದಾಯ ವಿದ್ಯಾರ್ಥಿಗಳಿಗೆ ಉತ್ತೇಜನ ನೀಡಲು ಪ್ರೋತ್ಸಾಹ ಧನ ನೀಡುವ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ. ಇದರನ್ವಯ ವಿವಿಧ ತರಗತಿಗಳಲ್ಲಿ ವ್ಯಾಸಂಗ ಮಾಡುವ ಮತ್ತು ವಾರ್ಷಿಕ ಆಧಾಯ ಕೆನೆಪೊದರು ನೀತಿಯನ್ವಯ ಉಪ ಜಾತಿ ಹಾಗೂ ಆಧಾಯ ಪ್ರಮಾಣ ಪತ್ರ ಮತ್ತು ಅಂಕಗಳನ್ನು ಆಧರಿಸಿ (1) ಎಸ್.ಎಸ್.ಎಲ್.ಸಿ ಯಲ್ಲಿ ಉತ್ತೀರ್ಣರಾಗಿರುವ (2) ಪಿ.ಯು.ಸಿಯಲ್ಲಿ ಉತ್ತೀರ್ಣರಾಗಿರುವ (3) ಪ್ರವೇಶ ಪಡೆದ ಪದವಿಧರರಿಗೆ (ವೃತ್ತಿಪರ ಕೋರ್ಸಿನ ಪದವಿಧರರನ್ನು ಹೊರತುಪಡಿಸಿ) ರೂ.3,000/-, ರೂ.4,000/- ಮತ್ತು ರೂ.5,000/-ಗಳನ್ನು ಪ್ರತಿ ವಿದ್ಯಾರ್ಥಿಗೆ ಪ್ರತಿ ವರ್ಷ ನೀಡತಕ್ಕದ್ದು.

ಪ್ರತಿ ವರ್ಷವು ಲಭ್ಯವಿರುವ ಆಯವ್ಯಯದಿಂದ ಎಸ್.ಎಸ್.ಎಲ್.ಸಿ.ಯಲ್ಲಿ ಉತ್ತೀರ್ಣರಾಗುವ ವಿದ್ಯಾರ್ಥಿಗಳಿಗೆ ಶೇ.30, ಪಿ.ಯು.ಸಿ.ಯಲ್ಲಿ ಉತ್ತೀರ್ಣರಾಗಿರುವ ವಿದ್ಯಾರ್ಥಿಗಳಿಗೆ ಶೇ.40 ಮತ್ತು ಆ ವರ್ಷ ಪ್ರವೇಶ ಪಡೆದ ಪದವಿಧರರಿಗೆ ಶೇ.30 ವಿದ್ಯಾಭ್ಯಾಸವನ್ನು ಮುಂದುವರೆಸಲು ಪ್ರೋತ್ಸಾಹ ಧನವನ್ನು ಈ ಅನುಪಾತದಲ್ಲಿ ಹಂಚಿಕೆ ಮಾಡತಕ್ಕದ್ದು.

ಈ ಅನುಪಾತದಿಂದ ಅನುಬಂಧದಲ್ಲಿ ಒದಗಿಸಿರುವ ಆರ್ಥಿಕ ಮತ್ತು ಭೌತಿಕ ಗುರಿಗಳನ್ವಯ ಪ್ರತಿ ಜಿಲ್ಲೆಯ ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸವನ್ನು ಮುಂದುವರಿಸಲು ಅನುಕ್ರಮವಾಗಿ ಪ್ರೋತ್ಸಾಹ ಧನವನ್ನು ನೀಡತಕ್ಕದು. ಅದರಂತೆ ಈ ಕೆಳಕಂಡ ಆದೇಶ.

ಸರ್ಕಾರಿ ಆದೇಶ ಸಂಖ್ಯೆ:ಸಕಇ 87 ಅಸಂಯೋ 2006(2), ಬೆಂಗಳೂರು, ದಿನಾಂಕ: 9ನೇ ಆಗಸ್ಟ್ 2006

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದೆ. ಪ್ರತಿ ಜಿಲ್ಲೆಯ ಎಸ್.ಎಸ್.ಎಲ್.ಸಿ.ಯಲ್ಲಿ ಉತ್ತೀರ್ಣರಾದ, ಪಿ.ಯು.ಸಿ.ಯಲ್ಲಿ ಉತ್ತೀರ್ಣರಾದ ಮತ್ತು ಆ ವರ್ಷದಲ್ಲಿ ತೇರ್ಗಡೆ ಹೊಂದಿದ ಕಲೆ, ವಾಣಿಜ್ಯ ಮತ್ತು ವೃತ್ತಿಪರೇತರ ಪದವಿಧರ ಅಲ್ಪಸಂಖ್ಯಾತ ವಿದ್ಯಾರ್ಥಿಗಳಿಗೆ ಶೇಖಡ 30 (ಎಸ್.ಎಸ್.ಎಲ್.ಸಿ) ಶೇಖಡ 40 (ಪಿ.ಯು.ಸಿ) ಮತ್ತು ಶೇಖಡ 30 ಪದವಿಧರರು ಈ ಅನುಪಾತದಲ್ಲಿ ಅನುಬಂಧದಲ್ಲಿ ಒದಗಿಸಿರುವ ಆರ್ಥಿಕ ಮತ್ತು ಭೌತಿಕ ಗುರಿಗಳನ್ವಯ ಪ್ರತಿ ಜಿಲ್ಲೆಯ ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ಎಸ್.ಎಸ್.ಎಲ್.ಸಿ.ಯಲ್ಲಿ ಉತ್ತೀರ್ಣರಾಗಿ ಪಿ.ಯು.ಸಿ.ಯಲ್ಲಿ ಪ್ರವೇಶ ಪಡೆದ ವಿದ್ಯಾರ್ಥಿಗಳಿಗೆ ರೂ.3,000/- ಪಿ.ಯು.ಸಿ.ಯಲ್ಲಿ ಉತ್ತೀರ್ಣರಾಗಿ ಪದವಿ ಕೋರ್ಸ್‌ಗೆ ಪ್ರವೇಶ ಪಡೆದ ವಿದ್ಯಾರ್ಥಿಗಳಿಗೆ ರೂ.4,000/- ಮತ್ತು ಪದವಿಧರರಿಗೆ (ವೃತ್ತಿಪರ ಕೋರ್ಸಿನ ಪದವಿಧರರನ್ನು ಹೊರತುಪಡಿಸಿ) ಮುಂದಿನ ವರ್ಷಗಳಲ್ಲಿ ವಿದ್ಯಾಭ್ಯಾಸವನ್ನು ಮುಂದುವರಿಸಲು ರೂ.5,000/-ವನ್ನು ನೀಡಲು ಆದೇಶಿಸಿದೆ.

ಮುಂಬರುವ ಆರ್ಥಿಕ ವರ್ಷದ ಆಯವ್ಯಯಗಳಲ್ಲಿ ಲಭ್ಯವಿರುವ ಮೊತ್ತದಿಂದ ಪ್ರತಿ ವರ್ಷ ಎಸ್.ಎಸ್.ಎಲ್.ಸಿ.ಯಲ್ಲಿ ಉತ್ತೀರ್ಣರಾಗಿರುವ ವಿದ್ಯಾರ್ಥಿಗಳಿಗೆ ಶೇ.30, ಪಿ.ಯು.ಸಿ.ಯಲ್ಲಿ ಉತ್ತೀರ್ಣರಾಗಿರುವ ವಿದ್ಯಾರ್ಥಿಗಳಿಗೆ ಶೇ.40 ಮತ್ತು ಆ ವರ್ಷ ಪ್ರವೇಶ ಪಡೆದ ಪದವಿಧರರಿಗೆ ಶೇ.30ನ್ನು ವಿದ್ಯಾಭ್ಯಾಸವನ್ನು ಮುಂದುವರೆಸಲು ಪ್ರೋತ್ಸಾಹ ಧನವನ್ನು ಈ ಅನುಪಾತದಲ್ಲಿ ಹಂಚಿಕೆ ಮಾಡತಕ್ಕದ್ದು.

ಈ ವೆಚ್ಚವನ್ನು 2006-07ನೇ ಆರ್ಥಿಕ ವರ್ಷದ ಲೆಕ್ಕ ಶೀರ್ಷಿಕೆ 2225-03-277-2-61 ರಾಜ್ಯವಲಯ ಯೋಜನೆಯಡಿಯಲ್ಲಿ ಒದಗಿಸಿರುವ ರೂ.1.50 ಕೋಟಿಗಳಲ್ಲಿ ಭರಿಸತಕ್ಕದ್ದು.

ಷರತ್ತುಗಳು:

1) ವಿದ್ಯಾರ್ಥಿಗಳು ಅಲ್ಪಸಂಖ್ಯಾತರ ಸಮುದಾಯಕ್ಕೆ ಸೇರಿದವರಾಗಿರಬೇಕು.
2) ಅರ್ಜಿಯನ್ನು ಶಾಲೆಯ ಮುಖ್ಯೋಪಧ್ಯಾಯ ಮತ್ತು ಪದವಿಧರರು ಸಂಬಂಧಪಟ್ಟ ಕಾಲೇಜಿನ ಪ್ರಾಂಶುಪಾಲರ ಮೂಲಕ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆಯ ಜಿಲ್ಲಾ ಅಧಿಕಾರಿಗಳಿಗೆ ಸಲ್ಲಿಸಬೇಕು.
3) ಅಭ್ಯರ್ಥಿಗಳಿಗೆ ಪ್ರೋತ್ಸಾಹ ಧನ ನೀಡಿದ ಬಗ್ಗೆ ಸಂಬಂಧಪಟ್ಟ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಇವರು ಮುದ್ರಾಂಕಿತ ಪಟ್ಟಿಯನ್ನು ಕಾಪಾಡತಕ್ಕದ್ದು.
4) ಪ್ರೋತ್ಸಾಹ ಧನವನ್ನು ತುಲನಾತ್ಮಕ ರೀತಿಯಲ್ಲಿ ಹೆಚ್ಚು ಅಂಕಗಳನ್ನು ಪಡೆದ ವಿದ್ಯಾರ್ಥಿಗಳಿಗೆ ಇಳಿಕೆ ಕ್ರಮದನುಸಾರ ಹಂಚಿಕೆ ಮಾಡತಕ್ಕದ್ದು.

ಅನುಷ್ಠಾನ ಸಮಿತಿ

| | | |
|---|---|---|
| 1) | ಆಯಾಯ ಜಿಲ್ಲೆಯ ಜಿಲ್ಲಾಧಿಕಾರಿಗಳು | - ಅಧ್ಯಕ್ಷರು |
| 2) | ಆಯಾಯ ಜಿಲ್ಲೆಯ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ (ಡಿ.ಡಿ.ಪಿ.ಐ) | - ಸದಸ್ಯ |
| 3) | ಹಿಂದುಳಿದ ವರ್ಗ ಮತ್ತು ಅಲ್ಪಸಂಖ್ಯಾತರ ಇಲಾಖೆಯ ಜಿಲ್ಲೆಯ ಅಧಿಕಾರಿಗಳು | - ಸದಸ್ಯ ಕಾರ್ಯದರ್ಶಿ. |

ಈ ಯೋಜನೆಯನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಸಮಿತಿಯ ಅಧ್ಯಕ್ಷರಿಗೆ ಅವಶ್ಯವಿದ್ದಲ್ಲಿ ಹೆಚ್ಚುವರಿ ಸದಸ್ಯರನ್ನು ನೇಮಿಸಲು ಅಧಿಕಾರ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ 320 ವೆಚ್ಚ3/06 ದಿನಾಂಕ:27-07-2006ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಕೆ.ಎ. ಜಾವಿದ್

ಪಿ.ಆರ್. 1337 ಸರ್ಕಾರದ ಅಧೀನ ಕಾರ್ಯದರ್ಶಿ-3(ಪ್ರ), ಸಮಾಜ ಕಲ್ಯಾಣ ಇಲಾಖೆ.

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

ವಿಷಯ: ಶ್ರೀ ಎಲ್.ಎನ್.ಸಾಲುಂಕೆ, ಸರ್ಕಾರದ ಅಧೀನ ಕಾರ್ಯದರ್ಶಿ ರವರು ಸರ್ಕಾರದ ದಂಡನೆ ಆದೇಶದ ವಿರುದ್ಧ ಗೌರವಾನ್ವಿತ ರಾಜ್ಯಪಾಲರಿಗೆ ಸಲ್ಲಿಸಲಾದ ಮೇಲ್ಮನವಿ ಬಗ್ಗೆ ಆದೇಶ ಕುರಿತು.

ಓದಲಾಗಿದೆ: 1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 97 ಎಸ್‌ಇಎನ್ 98 ದಿನಾಂಕ:29.12.05.

2) ಶ್ರೀ ಎಲ್.ಎನ್.ಸಾಲುಂಕೆ, ಸರ್ಕಾರದ ಅಧೀನ ಕಾರ್ಯದರ್ಶಿ ರವರು ಗೌರವಾನ್ವಿತ ರಾಜ್ಯಪಾಲರಿಗೆ ಸಲ್ಲಿಸಿದ ದಿ:01.04.06ರ ಮೇಲ್ಮನವಿ.

ಪ್ರಸ್ತಾವನೆ:

ಶ್ರೀ ಎಲ್.ಎನ್.ಸಾಲುಂಕೆ, ಸರ್ಕಾರದ ಅಧೀನ ಕಾರ್ಯದರ್ಶಿ ರವರು ಬೆಳಗಾವಿ ತಾಲ್ಲೂಕು ಕ್ಷೇತ್ರಾಭಿವೃದ್ಧಿ ಅಧಿಕಾರಿಯಾಗಿ ನಿಯೋಜನೆ ಮೇಲೆ ದಿ:12.06.1993 ರಿಂದ 19.01.1994ರವರೆಗೆ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಬೆಳಗಾವಿ ತಾಲ್ಲೂಕಿನ ವ್ಯಾಪ್ತಿಯಲ್ಲಿ ಆಶ್ರಯ ವಸತಿ ಯೋಜನೆಯಡಿಯಲ್ಲಿ ರೂ.7,03,000/- ಸರ್ಕಾರದ ಹಣ ದುರುಪಯೋಗ ಮಾಡಿರುವ ಆರೋಪದ ವಿರುದ್ಧ ಇಲಾಖಾ ವಿಚಾರಣೆ ನಡೆಸಿ, ಶಿಸ್ತು ಪ್ರಾಧಿಕಾರಿಯಾದ ಸರ್ಕಾರವು ಸದರಿಯವರ ವಿರುದ್ಧ ಹಣ ದುರುಪಯೋಗವಾಗಿರುವ ಆರೋಪವು ಸಾಕ್ಷ್ಯಾಧಾರಗಳ ಕೊರತೆಯಿಂದ ಸಾಬೀತಾಗಿಲ್ಲದಿದ್ದರೂ ಆರೋಪಿತರು ಕಾರ್ಯವಿಧಾನದ ಲೋಪವೆಸಗಿರುವುದಾಗಿ ನಿರ್ಣಯಿಸಿ ಅವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ ನಿಯಮ 8(ii) ರಡಿಯಲ್ಲಿ ವಾಗ್ದಂಡನೆ ವಿಧಿಸಿ ಮೇಲೆ ಓದಲಾದ (1) ರಲ್ಲಿ ಆದೇಶಿಸಲಾಗಿತ್ತು.

ಮೇಲ್ಕಂಡ ದಂಡನಾ ಆದೇಶದ ವಿರುದ್ಧ ಆರೋಪಿತರು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 18ರಂತೆ ಗೌರವಾನ್ವಿತ ರಾಜ್ಯಪಾಲರಿಗೆ ಮೇಲೆ(2)ರಲ್ಲಿ ಓದಲಾದ ಮೇಲ್ಮನವಿ ಸಲ್ಲಿಸಿರುತ್ತಾರೆ. ಅವರು ಸಲ್ಲಿಸಿರುವ ಮೇಲ್ಕಂಡ ಮನವಿಯಲ್ಲಿ ತಮ್ಮ ಮೇಲೆ ವಿಧಿಸಿರುವ ದಂಡನೆ ಆದೇಶವನ್ನು ರದ್ದುಗೊಳಿಸಿ ಅವರನ್ನು ಆರೋಪಮುಕ್ತರನ್ನಾಗಿಸಬೇಕೆಂದು ಕೋರಿದ್ದರು.

ಶ್ರೀ ಎಲ್.ಎನ್.ಸಾಲುಂಕೆ, ಸರ್ಕಾರದ ಅಧೀನ ಕಾರ್ಯದರ್ಶಿ ರವರು ಸಲ್ಲಿಸಿರುವ ಮೇಲ್ಮನವಿ ಮತ್ತು ತತ್ಸಂಬಂಧ ಪರಿಶೀಲನಾ ಟಿಪ್ಪಣಿ ಈ ಕೆಳಕಂಡಂತಿದೆ:-

| Sl. No. | Para in the appeal | Remarks |
|---|---|---|
| 1 | I, L.N.Salunke was appointed as Assistant in KGS during 1975 after having recruited through KPSC. While I was working as Section Officer in my parent Department, I was sent on deputation to work as Block Development Officer, Taluk Panchayat, Belgaum. I worked in the capacity of B.D.O. from 12.06.93 to 19.01.94. On the alleged ground that the guidelines stipulated in G.O. No.HUD 1 HBH(1) 95, dated 16.08.95 were not followed in release of funds of about Rs.7,03,000/- in the construction of Houses under Ashraya Scheme a departmental enquiry was ordered by issue of show cause notice No.ಗ್ರಾಅಪ 117 ಪಿಸಿಬಿ 93, dated 17.06.98 along with articles of charges against me and 4 others. The allegation was that this work was entrusted to the Contractors instead of beneficiaries as per the guidelines issued in G.O. dated 16.08.95 cited supra. | No remarks. |
| 2 | As I have not admitted the alleged charge a retired Judge was appointed as an Enquiry Officer in G.O. No. ಗ್ರಾಅಪ 117 ವಿಸೇಬಿ 97 dated 13.11.03 to continue the enquiry and to furnish enquiry report to Government. | Disciplinary Authority has gone through whole records including Cash book in detail which has not been done by the Enquiry Officer who has |

| Sl. No. | Para in the appeal | Remarks |
|---|---|---|
| | The Enquiry Officer submitted his enquiry report to Government on 15.11.04. The Enquiry Officer in his enquiry report has held that the prosecution has utterly failed in establishing any of the charges. He has therefore submitted the report that no charges are proved against me and I was totally exonerated from all the charges in that report. But in the second show cause notice issued to me along with the aforesaid enquiry with disciplinary authority report vide No.DPAR 97 SEN 98 dt:21.09.05 it was stated that I was charged dereliction duty in entrusting the work of construction of houses to Contractors instead of getting the work done through beneficiaries. Holding this view, I was asked to submit my explanation as to why the enquiry report cannot be rejected and why action cannot be taken against me as per rules for the aforesaid lapses. I have furnished my reply to this second show cause notice denying the charges again. However, the disciplinary authority ordered imposing the penalty of Censure under rule 8(ii) of KCS (CCA) rules vide G.O. No.DPAR 97 SEN 98 dt:29.12.05 rejecting my submissions. | come to the conclusion on the basis of mere oral evidence of the witnesses. Hence Disciplinary Authority has imposed the minor penalty of 'Censure' and the same is reasonable for the procedural lapse. The appellant had made payments without obtaining inspection reports from the concerned Junior Engineers. Unsigned bills may please be seen at page 37-112 of the vouchers placed below. |
| 3 | No financial loss was caused by me to Government **abinitio**. There was no instance during my period where the work was entrusted to contractors and money paid to them. The work was got done only through the beneficiaries during my period and money was paid to the beneficiaries only after completion of their work. | It has been charged that the Appellant has committed a financial loss of Rs.7,03,000/- as per the inspection report of C.A.O., Zilla Panchayat, Belgaum where cheque numbers and amount mentioned in detail. However the charge has not been proved. It is also found in the Cash Book that amount has been drawn through self cheque instead of beneficiaries. |
| 4 | The penalty of censure was inflicted on me considering that construction of houses under Ashraya Scheme was entrusted to Contractors and money was paid them during my period. This allegation is made without basis and without proper verification of records. The extract of the cashbook send to me as list of documents in the form of Annexure III to articles of charges prima facie established that the cheques were paid only to beneficiaries. However, while going through the records during the enquiry, I have noticed that the following 3 cheques were only paid to contractors. | Contention of the Appellant is not correct. Allegations have been made with full basis and with verification of the whole records only. Cheque No. along with date and amount mentioned in the appeal is not concerned with Sri. L.N.Salunke. It pertains to some other officer involved in the joint inquiry conducted by the RDPR. Therefore problem does not arise. |

| Sl. No. | Cheque No. | Date | Amount | Details |
|---|---|---|---|---|
| 1 | 972676 | 03.09.94 | 36,000/- | Shri. Basappa Chigare, Contractor, Construction of houses under Ashraya Scheme. |
| 2 | 971680 | 25.09.94 | 12,000/- | -do- |
| 3 | 971678 | 28.09.94 | 68,000/- | Shri Patil, Benakanahalli Village, Ashraya Scheme work. |

| Sl. No. | Para in the appeal | Remarks |
|---|---|---|
| 5 | The aforesaid cheques were paid to contractors during September 1994 after I left the post of BDO in January 1994. Even though, a single cheque was not paid to contractors during my period, I was falsely implicated on base less frivolous charges with the allegation of procedural lapses. There is absolutely no truth in the charges. The Enquiry Officer in his enquiry report has held that the charges are not proved. I am held responsible for the procedural lapses maliciously. | As explained above the cheques referred to are not concerned to the appellant. |
| 6 | I am therefore submitting the appeal under rule 18 KCS (CC&A) Rules to the Excellency the Governor of Karnataka to set aside the order passed by the disciplinary authority in G.O. No.DPAR 97 SEN 98 dt:29.12.05 imposing the penalty of censure under rule 8(ii) of KCS (CC&A) Rules for the detailed reasons explained above. As I am retiring from service during September 2006. I humbly submit that necessary order may kindly to passed early so that I can retire from service with unblemished records. | After examination of the enquiry report the explanation submitted by the appellant the Disciplinary Authority came to the conclusion that the appellant is held responsible for procedural lapse. Hence a minor penalty of Censure has been imposed. There is no ground for consideration. Appeal is liable for rejection. |

ಮೇಲ್ಕಂಡ ವಾಸ್ತವಾಂಶಗಳನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರವು ಈ ಕೆಳಕಂಡಂತೆ ಆದೇಶಿಸಿದೆ.

ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 178 ಎಸ್‌ಇಎನ್ 06 ಬೆಂಗಳೂರು, ದಿನಾಂಕ: 1ನೇ ಸೆಪ್ಟೆಂಬರ್ 2006

I have considered the appeal petition under Rule 18 of KCS (CCA) Rules 1957 submitted by Sri L.N.Salunke, Under Secretary to Government, Karnataka Government Secretariat against the orders of Government as disciplinary authority imposing the penalty of 'Censure' vide G.O.No.DPAR 97 SEN 98 dated 29.12.2005. I have considered the appeal in the light of the contentions made in the appeal petition and the connected inquiry records and the appeal records.

A Joint Departmental Enquiry was contemplated against the following officers for misuse of funds under Ashraya Housing scheme as stated against their names when they were working as B.D.O's in Taluk Panchayat, Belgaum:

1) Sri B.B.Madanbhavi, Retd. BDO, Belgaum - Rs.3,10,000/-
2) Sri L.N.Salunke, then BDO, Belgaum - Rs.7,03,000/-
3) Sri Kudari, Retd. BDO, Belgaum - Rs. 24,000/-
4) Sri S.B.Bhadri, Retd. BDO, Belgaum - Rs. 12,000/-
5) Sri K.K.Kamble, SDA, O/o BDO, Belgaum - Rs.2,10,000/-

Appellant Sri Salunke belongs to Karnataka Government Secretariat Service and was working as BDO, Taluk Panchayat, Belgaum on deputation from 12.06.1993 to 19.01.1994. During his term as BDO it is alleged that he did not follow the guidelines as stipulated by the Government in releasing of funds to the extent of Rs.7,03,000/- for the construction of houses under Ashraya Housing Scheme. He had entrusted this work to the contractors instead of beneficiaries as per the guidelines.

The borrowing authority i.e., RDPR Department initiated the Departmental Enquiry against all the accused including the appellant.

Sri B.L.Srikantaiah, Retired District and Sessions Judge, who was the Enquiry Officer, submitted his Enquiry Report concluding that all the 5 accused are innocent. His conclusion was based on the statements of witnesses in the enquiry. But the report has been totally rejected by the Government (DPAR) on the grounds that the Enquiry Officer has not gone through the whole records including vouchers/Junior Engineer report/cash book etc., in detail and instead he has come to the conclusion on the basis of mere oral evidence of witnesses.

Based on the Enquiry report the RDPR Department has recommended to DPAR to close the case in respect of Sri Salunke. As mentioned above, the Enquiry Report has been rejected by the Government. But DPAR has taken a decision to impose the minor penalty of 'Censure' on the appellant saying that he has entrusted the work of the construction of Ashraya houses to the contractor.

It may be seen that while submitting the file to the Hon'ble Chief Minister to impose the penalty of Censure on the appellant it has been recorded that the RDPR Department has already imposed the penalty of Censure on the other accused. The DPAR has issued G.O. imposing the penalty of Censure on the appellant on 29.12.2005. But the RDPR Department has issued orders exonerating all the accused

(three of the AGOs belong to Revenue Department and one AGO belongs to Agriculture Department as shown Para 61 n/f in File No.DPAR 97 SEN 98 and they are not RDPR Department officials) except Sri Salunke by accepting the above said enquiry report and stating that all the accused have retired after attaining superannuation from Government service as per its Order dated 27.01.2006.

In this context, the appellant has filed an appeal for exonerating him from Censure punishment.

The procedural lapses have come to the notice, so far as the appellant is concerned:

1) Sri Salunke had made payments without obtaining the inspection reports in most of the cases from the concerned Junior Engineer and also did not pass orders for payment. It could be seen from the vouchers/bills placed in the file that many of the vouchers/bills were left unsigned for reasons unknown.
2) Thought there are entries in the Cash book for having distributed the amount to the beneficiaries, he had not signed the Cash book.
3) During his tenure from 12.6.1993 to 19.1.1994 i.e., only in seven months' time, the AGO has drawn Rs.7,03,000.00 through self cheques (14 cheques) from State Bank of Hyderabad so as to make payments to the beneficiaries. It has been shown that cash has been disbursed to the beneficiaries. Instead, he should have disbursed cheques to the beneficiaries as per the guidelines.
4) He has not maintained the M.B. record which is very essential for release of funds at different stages during construction.

These facts clearly show that he not only deviated from the regular procedures laid down but also violated Articles 49, 50 and 329 of K.F.C.

There is a mention in the file about the audit report. But the audit report has not been placed on the file submitted. There is no accountability for having made payments for the entire Rs.7,03,000.00. However, 31 signed vouchers and 23 unsigned vouchers for Rs.2,000/- each amounting to Rs.1,28,000/-; 8 signed vouchers and 4 unsigned vouchers for Rs.4,000/- amounting to Rs.48,000/- only are available in the file. There are no vouchers for the remaining funds.

Apart from these – it is amazing to note that Sri K.K. Kamble, SDA who was working as Second Division Assistant and was looking after the Ashraya Housing Scheme released Rs.2,10,000/- himself without his superior's approval as per the report of the Presenting Officer and Deputy Secretary (Admn) Z.P., Belgaum. The action of the said official is nothing but a grave financial impropriety.

The above facts reveal the casualness, negligence on the part of the officers concerned and violation of the G.Os issued time and again. The lapses are serious in nature and evidently support the charges made.

The Presenting Officer in his report dated 20.7.2004 submitted to the Enquiry Officer made a mention of the discrepancies which certainly support the charges leveled against him. He deviated from all the normal procedures. More than the procedural lapses, he misappropriated the funds. Also, the question of his integrity is in doubt as he failed in the duties and responsibilities entrusted to him. As such he has violated Rule 3(i)(ii) and (iii) of the Karnataka Civil Services (Conduct) Rules, 1966.

The following intriguing points need to be clarified:

1) Out of the 5 accused, 3 officials are from Revenue Department and 1 each from Agriculture Department and Karnataka Government Secretariat. The borrowing department i.e., RDPR Department has rightly referred the case of Sri Salunke to its appointing authority i.e., DPAR. But it is quite surprising that the RDPR Department without referring the matter to their parent departments (appointing authority) has exonerated all the remaining 4 officials. How and why this was done needs clarification.
2) It is baffling that the Enquiry Officer instead of going through all the available relevant documents has come to the conclusion on the basis of mere oral evidence of witnesses. More than once I have remarked that the selection of enquiry officers is either casual or they are not conversant with procedures of enquiry. This needs careful attention of DPAR.
3) How did the authorities ignore and did not check the cash and payment register which has to be completed on a day-to-day basis? The entry relating to each item of receipt or expenditure being made simultaneously with the transaction has not been made regularly. The cash book should be closed at the end of each day and the balance struck should be given in detail which has not been effected.
4) It is also astonishing to note that S.D.A. Sri. Kamble, who assumes the power of the Drawing and Disbursing Officer and supposedly releases funds to the beneficiaries has committed a high order of financial impropriety. The official superiors have lost sight completely of this serious financial

propriety or it condoned. Had the cash and payment register been maintained properly, this incident would not have occurred.

5) The action of the RDPR department while sending the file to this office, in not going through various deficiencies/deviations in this episode, which include misappropriation of funds, solely in depending upon the report of the enquiry officer and in exonerating 4 officials of other departments will legitimately raise doubts and misgivings.
6) The dates of superannuation of the said officials have not been mentioned in the records.
7) Rs. 7 lakhs within 7 months of his tenure as Block Development Officer have been drawn by Sri. Salunke.
8) It is a clear case of misappropriation and embezzlement of funds. The decision of the disciplinary authority in the case of Sri Salunke that the **appellant is held responsible for the procedural lapse hence a penalty of Censure** has been imposed from the DPAR is an eye-wash and needs to be re-looked.

The whole episode full of fraudulent irregularities and deliberate mischief shows as to how a scheme meant for the poor people is being administratively implemented. There may be many more such cases and the implementation of the scheme requires attention of the Department concerned. This may be brought to the notice of Hon'ble Chief Minister and the Minister concerned.

As regards the case under consideration in the light of the observations made above, a fresh enquiry be ordered in respect of all the given officials involved and a competent Enquiry Officer be asked to complete it within three months from the date of the orders of the DPAR.

Sd/-
**T.N.CHATURVEDI**
Governor of Karnataka.

ಈ ಪ್ರಕರಣದಲ್ಲಿ ಮೇಲ್ಮನವಿ ಪ್ರಾಧಿಕಾರವು ಮೇಲ್ಕಂಡಂತೆ ಆದೇಶಿಸಿರುವ ಪ್ರಕಾರ ಆಪಾದಿತರಾದ ಶ್ರೀ ಎಲ್.ಎನ್.ಸಾಲುಂಕೆ, ಸರ್ಕಾರದ ಅಧೀನ ಕಾರ್ಯದರ್ಶಿ, ಹಿಂದಿನ ಕ್ಷೇತ್ರಾಭಿವೃದ್ಧಿ ಅಧಿಕಾರಿ, ತಾಲ್ಲೂಕು ಪಂಚಾಯತ್, ಬೆಳಗಾವಿ, ಶ್ರೀ ಬಿ.ಬಿ.ಮದನ್‌ಬಾವಿ, ಹಿಂದಿನ ಕ್ಷೇತ್ರಾಭಿವೃದ್ಧಿ ಅಧಿಕಾರಿ, ತಾಲ್ಲೂಕು ಪಂಚಾಯತ್ ಬೆಳಗಾವಿ (ನಿವೃತ್ತ), ಶ್ರೀ ಎಸ್.ಪಿ.ಕುದರಿ, ಹಿಂದಿನ ಕ್ಷೇತ್ರಾಭಿವೃದ್ಧಿ ಅಧಿಕಾರಿ, ತಾಲ್ಲೂಕು ಪಂಚಾಯತ್ ಬೆಳಗಾವಿ (ನಿವೃತ್ತ ತಹಶೀಲ್ದಾರ್), ಶ್ರೀ ಎಸ್.ಬಿ.ಭಾದ್ರಿ, ಹಿಂದಿನ ಕ್ಷೇತ್ರಾಭಿವೃದ್ಧಿ ಅಧಿಕಾರಿ, ತಾಲ್ಲೂಕು ಪಂಚಾಯತ್ ಬೆಳಗಾವಿ (ನಿವೃತ್ತ ತಹಶೀಲ್ದಾರ್), ಶ್ರೀ ಕೆ.ಕೆ.ಕಾಂಬ್ಳೆ, ಹಿಂದಿನ ದ್ವಿತೀಯ ದರ್ಜೆ ಸಹಾಯಕರು, ಹಿಂದಿನ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಕಛೇರಿ, ಬೆಳಗಾವಿ (ನಿವೃತ್ತ) ಇವರುಗಳ ವಿರುದ್ಧ ಹೊಸದಾಗಿ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಗಳನ್ನು ನೇಮಿಸಿ ಆದೇಶದ ದಿನಾಂಕದಿಂದ 3 ತಿಂಗಳ ಒಳಗಾಗಿ ವಿಚಾರಣೆಯನ್ನು ಮುಕ್ತಾಯಗೊಳಿಸಲು ಹಾಗೂ ವಿಚಾರಣಾ ವರದಿಯನ್ನು ಶ್ರೀ ಎಲ್.ಎನ್.ಸಾಲುಂಕೆ ಅವರಿಗೆ ಸಂಬಂಧಿಸಿದಂತೆ ಕ್ರಮಕ್ಕಾಗಿ ಸಿಆಸು ಇಲಾಖೆಗೆ ಕಳುಹಿಸಲು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಕ್ರಮಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಕೆ. ರಘುರಾಮ್ ಭಂಡಾರಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

ಪಿ.ಆರ್. 1335

ವಿಷಯ: ಶ್ರೀ ಎಸ್.ಎನ್.ನಾಗರಾಜ್ ಹಾಗೂ ಶ್ರೀ ಜಿ.ಬಿ.ಹಿರೇಮಣಿಯವರ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿಗಳು ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಕ್ರಮಾಂಕ:ಸಿಆಸುಇ 17 ಎಸ್‌ಇಎನ್ 03 ದಿನಾಂಕ:07.08.03.
2) ಸರ್ಕಾರದ ಆದೇಶ ಕ್ರಮಾಂಕ:ಲೋಇ 15 ಸೇಇವಿ 03 ದಿನಾಂಕ:12.01.04.
3) ವಿಚಾರಣಾ ವರದಿ ಕ್ರಮಾಂಕ:ಲೋಕ್/ಎಆರ್‌ಇ-4/ಇಎನ್‌ಕ್ಯೂ-19/05 ದಿನಾಂಕ:22.05.06.
4) ಸನ್ಮಾನ್ಯ ಲೋಕಾಯುಕ್ತರ ಪತ್ರ ಕ್ರಮಾಂಕ:ಲೋಕ್/ಎಆರ್‌ಇ-4/ ಇಎನ್‌ಕ್ಯೂ-19/05 ದಿನಾಂಕ:25.05.06.

ಪ್ರಸ್ತಾವನೆ:

ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಆಯುಕ್ತರ ಹುದ್ದೆಯಲ್ಲಿ ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿಗಳಾದ ಶ್ರೀ ಎಸ್.ಎನ್.ನಾಗರಾಜ್ ಹಾಗೂ ಶ್ರೀ ಜಿ.ಬಿ.ಹಿರೇಮಣಿಯವರ್ ಅವರುಗಳು, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಹುದ್ದೆಯಲ್ಲಿ ಶ್ರೀ ಹೆಚ್.ಸಿ.ನಾಗರಾಜ್ ಅವರು ಹಾಗೂ ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ಶ್ರೀ ಎಸ್.ಎ.ಸುಧೀರ್ ಕುಮಾರ್ ಅವರು ಕಾರ್ಯನಿರ್ವಹಿಸುತ್ತಿದ್ದಾಗ, ಸರ್ಕಾರಿ ಆದೇಶ/ಸುತ್ತೋಲೆ ಇತ್ಯಾದಿಗಳನ್ನು ಉಲ್ಲಂಘಿಸಿ ಬಿಲ್ಡಿಂಗ್ ಬೈಲಾಗಳಿಗೆ ವ್ಯತಿರಿಕ್ತವಾಗಿ ನಿರ್ಮಾಣಗೊಂಡ ಕಟ್ಟಡಗಳ ಉಲ್ಲಂಘನೆಯಲ್ಲಿ ಶೇಕಡ 100ರಷ್ಟು ಕ್ರಮಬದ್ಧಗೊಳಿಸಿದ್ದಾರೆಂದೂ, ಬಿಲ್ಡಿಂಗ್ ಬೈಲಾಗಳ ಪ್ರಕಾರ ಶೇಕಡ 25ರಷ್ಟು ಉಲ್ಲಂಘನೆ ಮಾತ್ರ ಕ್ರಮಬದ್ಧಗೊಳಿಸಲು ಅವಕಾಶವಿದ್ದರೂ ಸಹ ಸರ್ಕಾರಿ ಆದೇಶ/ಸುತ್ತೋಲೆಗಳನ್ನು ಉಲ್ಲಂಘಿಸಿ ಕಟ್ಟಡ ಕಟ್ಟಿದ ಎಲ್ಲಾ ಪ್ರಕರಣಗಳನ್ನು ಕ್ರಮಬದ್ಧಗೊಳಿಸಿ ದುರ್ನಡತೆ ಎಸಗಿರುವ ಆರೋಪಗಳಿಗಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14-ಎ ರನ್ವಯ ಮೇಲ್ಕಂಡ ಅಧಿಕಾರಿಗಳ ವಿರುದ್ಧ

ಮೇಲೆ (1) ಮತ್ತು (2)ರಲ್ಲಿ ಓದಲಾದ ದಿ:07.08.03 ಮತ್ತು 12.01.04ರ ಸರ್ಕಾರಿ ಆದೇಶಗಳಲ್ಲಿ ಸನ್ಮಾನ್ಯ ಲೋಕಾಯುಕ್ತರ ಮೂಲಕ ಇಲಾಖಾ ವಿಚಾರಣೆಯನ್ನು ನಡೆಸಲು ಆದೇಶಿಸಲಾಯಿತು. ಅವರಿಂದ ವಿಚಾರಣಾಧಿಕಾರಿಯಾಗಿ ನೇಮಿಸಲ್ಪಟ್ಟ ಅಡಿಷನಲ್ ರಿಜಿಸ್ಟ್ರಾರ್ ವಿಚಾರಣೆಗಳು-4 ಅವರು ವಿಚಾರಣೆ ನಡೆಸಿ ಮೇಲೆ (3)ರಲ್ಲಿ ಓದಲಾದ ದಿ:22.05.06ರ ವಿಚಾರಣಾ ವರದಿಯನ್ನು ಲೋಕಾಯುಕ್ತರಿಗೆ ಸಲ್ಲಿಸಿ, ಈ ಕೆಳಕಂಡಂತೆ ನಿರ್ಣಯ ನೀಡಿರುತ್ತಾರೆ.

"ಶ್ರೀ ಎಸ್.ಎನ್.ನಾಗರಾಜ್ ಹಾಗೂ ಶ್ರೀ ಜಿ.ಬಿ.ಹಿರೇಮಣಿಯವರ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿಗಳು ಅವರುಗಳು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಆಯುಕ್ತರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ದಿ:10.6.97ರಂದು ನಡೆದ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ಸಾಮಾನ್ಯ ಸಭೆಯಲ್ಲಿ ಶೇಕಡ 25ಕ್ಕಿಂತ ಹೆಚ್ಚು ಬೈಲಾ ಉಲ್ಲಂಘನೆ ಮಾಡಿರುವ ಎಲ್ಲಾ ಕಟ್ಟಡಗಳನ್ನು ದಂಡ ವಿಧಿಸಿ ಸಕ್ರಮಗೊಳಿಸಲು ಪ್ರಾಧಿಕಾರದ ನಿರ್ಣಯದಂತೆ ಕ್ರಮ ಕೈಗೊಂಡಿರುತ್ತಾರೆ. ಮತ್ತು ಈ ಕ್ರಮವನ್ನು ಸರ್ಕಾರಕ್ಕೆ ವರದಿ ಮಾಡಿರುತ್ತಾರೆ. ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ವಿಧಿ 67ರ ಪ್ರಕಾರ ಇಂತಹ ತೀರ್ಮಾನವನ್ನು ಸರ್ಕಾರವು ಒಪ್ಪದಿದ್ದಲ್ಲಿ ರದ್ದುಪಡಿಸಲು ಅವಕಾಶವಿರುತ್ತದೆ. ಆದರೆ ಈ ಬಗ್ಗೆ ಯಾವುದೇ ಆಕ್ಷೇಪಣೆ ಇಲ್ಲವಾದ್ದರಿಂದ ಸರ್ಕಾರವು ರದ್ದುಪಡಿಸಿರುವುದಿಲ್ಲವಾದ್ದರಿಂದ ಅವರುಗಳ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿರುವುದಿಲ್ಲ." ಶ್ರೀ ಹೆಚ್.ಸಿ.ನಾಗರಾಜ್ ಅವರು ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಆಗಿ ಹಾಗೂ ಶ್ರೀ ಎಸ್.ಎ.ಸುಧೀರ್ ಕುಮಾರ್ ಅವರು ಸಹಾಯಕ ಇಂಜಿನಿಯರ್ ಆಗಿ ಕಾರ್ಯನಿರ್ವಹಿಸುತ್ತಿದ್ದಾಗ ಲೋಕಾಯುಕ್ತ ತಾಂತ್ರಿಕ ತಪಾಸಣಾ ಕೋಶದ ಅಭಿಪ್ರಾಯದ ಪ್ರಕಾರ ರಸ್ತೆ ನಿರ್ಮಾಣದಲ್ಲಿ ಗುಣಮಟ್ಟದ ಸಾಮಗ್ರಿಗಳನ್ನು ಉಪಯೋಗಿಸದೆ ಕಳಪೆ ಕಾಮಗಾರಿ ನಡೆಸಿ, ಸರ್ಕಾರಕ್ಕೆ ರೂ.53,699/- ಆರ್ಥಿಕ ನಷ್ಟ ಉಂಟು ಮಾಡಿರುವುದು ವ್ಯಕ್ತವಾಗುತ್ತದೆ. ಆದ್ದರಿಂದ ಶ್ರೀ ಹೆಚ್.ಸಿ.ನಾಗರಾಜ್ ಮತ್ತು ಶ್ರೀ ಎಸ್.ಎ.ಸುಧೀರ್ ಕುಮಾರ್ ಅವರುಗಳ ವಿರುದ್ಧ ಮಾಡಲಾದ ಆರೋಪವು ಭಾಗಶ: ಸಾಬೀತಾಗಿದೆ ಎಂಬ ನಿರ್ಣಯ ನೀಡಿರುತ್ತಾರೆ.

ವಿಚಾರಣಾಧಿಕಾರಿಯವರ ವರದಿಯನ್ನು ಪರಾಮರ್ಶಿಸಿದ ಸನ್ಮಾನ್ಯ ಲೋಕಾಯುಕ್ತರವರು ಶ್ರೀ ಎಸ್.ಎನ್.ನಾಗರಾಜ್ ಮತ್ತು ಶ್ರೀ ಜಿ.ಬಿ.ಹಿರೇಮಣಿಯವರ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿಗಳು ಅವರುಗಳ ವಿರುದ್ಧ ಮಾಡಲಾದ ಆರೋಪವು ಸಾಬೀತಾಗದೇ ಇರುವುದರಿಂದ ಅವರುಗಳನ್ನು ಆರೋಪಮುಕ್ತರನ್ನಾಗಿಸಲು ಹಾಗೂ ಶ್ರೀ ಹೆಚ್.ಸಿ.ನಾಗರಾಜ್ ಅವರ ವಿರುದ್ಧದ ಆರೋಪವು ಭಾಗಶ: ಸಾಬೀತಾಗಿರುವುದರಿಂದ ಹಾಗೂ ಅವರು ಕಳಪೆ ಕಾಮಗಾರಿ ಮಾಡಿ ಸರ್ಕಾರಕ್ಕೆ ರೂ.53,699/-ಗಳು ನಷ್ಟವಾಗಿರುವುದರಿಂದ ಅವರಿಗೆ 2 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ ಶಾಶ್ವತವಾಗಿ ತಡೆಹಿಡಿಯುವ ಹಾಗೂ ಅವರಿಂದಾಗಿ ಸರ್ಕಾರಕ್ಕೆ ನಷ್ಟವಾದ ರೂ.53,699/-ಗಳ ನಷ್ಟದ ಮೊತ್ತವನ್ನು ಅವರಿಂದ ವಸೂಲಿ ಮಾಡುವ ದಂಡನೆಯನ್ನು ಮತ್ತು ಶ್ರೀ ಎಸ್.ಎ.ಸುಧೀರ್ ಕುಮಾರ್ ಅವರ ವಿರುದ್ಧದ ಆರೋಪವೂ ಸಹ ಭಾಗಶ: ಸಾಬೀತಾಗಿರುವುದರಿಂದ ಅವರಿಗೆ ನೇಮಕಾತಿ ಪ್ರಾಧಿಕಾರವು ಸೂಕ್ತ ದಂಡನೆ ವಿಧಿಸಲು ಕ್ರಮ ಕೈಗೊಳ್ಳುವಂತೆ ಮೇಲೆ (4)ರಲ್ಲಿ ಓದಲಾದ ದಿ:25.05.06ರ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಶ್ರೀ ಹೆಚ್.ಸಿ.ನಾಗರಾಜ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ಎಸ್.ಎ.ಸುಧೀರ್ ಕುಮಾರ್, ಸಹಾಯಕ ಇಂಜಿನಿಯರ್ ಅವರುಗಳ ಮಾತೃ ಇಲಾಖೆ ಲೋಕೋಪಯೋಗಿ ಇಲಾಖೆ ಆಗಿರುತ್ತದೆ ಹಾಗೂ ಇವರುಗಳು ಲೋಕೋಪಯೋಗಿ ಇಲಾಖೆಯ ಆಡಳಿತ ವ್ಯಾಪ್ತಿಗೆ ಒಳಪಡುವುದರಿಂದ ಇವರುಗಳಿಗೆ ಸಂಬಂಧಿಸಿದಂತೆ ದಿ:22.05.06ರ ವಿಚಾರಣಾ ವರದಿ ಹಾಗೂ 25.05.06ರ ಸನ್ಮಾನ್ಯ ಲೋಕಾಯುಕ್ತರ ಶಿಫಾರಸ್ಸಿನನ್ವಯ ಲೋಕೋಪಯೋಗಿ ಇಲಾಖೆಯು ಪ್ರತ್ಯೇಕವಾಗಿ ಕ್ರಮ ಕೈಗೊಳ್ಳುವಂತೆ ತಿಳಿಸಲಾಗಿದೆ.

ಸನ್ಮಾನ್ಯ ಲೋಕಾಯುಕ್ತರ ಶಿಫಾರಸ್ಸು ಹಾಗೂ ವರದಿಯನ್ನು ಪರಿಶೀಲಿಸಿದ ಸರ್ಕಾರವು ಅದನ್ನು ಒಪ್ಪಿಕೊಂಡು ಆರೋಪಿತ ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿಗಳಾದ ಶ್ರೀ ಎಸ್.ಎನ್.ನಾಗರಾಜ್ ಮತ್ತು ಶ್ರೀ ಜಿ.ಬಿ.ಹಿರೇಮಣಿಯವರ್ ಅವರುಗಳನ್ನು ಆರೋಪಮುಕ್ತರನ್ನಾಗಿಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 17 ಎಸ್‌ಇಎನ್ 2003 ಬೆಂಗಳೂರು ದಿನಾಂಕ: 31ನೇ ಆಗಸ್ಟ್ 2006.

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಸರ್ಕಾರವು ಶ್ರೀ ಎಸ್.ಎನ್.ನಾಗರಾಜ್ ಮತ್ತು ಶ್ರೀ ಜಿ.ಬಿ.ಹಿರೇಮಣಿಯವರ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿಗಳು ಅವರುಗಳನ್ನು ದಿ:07.08.03ರ ಸರ್ಕಾರಿ ಆದೇಶದಲ್ಲಿ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸುತ್ತದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರುಗಳು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಕೆ.ರಘುರಾಮ್ ಭಂಡಾರಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

ಪಿ.ಆರ್. 1334

ವಿಷಯ: ಶ್ರೀ ಹೆಚ್.ಕೆ.ಹೊರ್ತಿಕರ್, ನಿವೃತ್ತ ಮುಖ್ಯ ಇಂಜಿನಿಯರ್ ಅವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

ಓದಲಾಗಿದೆ: 1) ನೋಟೀಸ್ ಸಂಖ್ಯೆ:ಸಿಆಸುಇ 78 ಎಸ್‌ಇಎನ್ 05 ದಿನಾಂಕ:16.06.2005.

2) ಶ್ರೀ ಹೆಚ್.ಕೆ.ಹೊರ್ತಿಕರ್, ನಿವೃತ್ತ ಮುಖ್ಯ ಇಂಜಿನಿಯರ್ ರವರ ದಿನಾಂಕ:23.06.2005ರ ಉತ್ತರ.

ಪ್ರಸ್ತಾವನೆ:

ಶ್ರೀ ಹೆಚ್.ಕೆ. ಹೊರ್ತೀಕರ್, ನಿವೃತ್ತ ಮುಖ್ಯ ಇಂಜಿನಿಯರ್ ಅವರು ಮುಖ್ಯ ಇಂಜಿನಿಯರ್ ರಾಷ್ಟ್ರೀಯ ಹೆದ್ದಾರಿ, ಬೆಂಗಳೂರು, ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಹಗರಿ ಸೇತುವೆ ಸುಂಕ ಸಂಗ್ರಹಣಾ ಕಾಮಗಾರಿ ಗುತ್ತಿಗೆಯ ಗುತ್ತಿಗೆದಾರರಿಗೆ ಕಡಿಮೆ

ದಂಡ ವಿಧಿಸಿ ಕರ್ತವ್ಯ ಲೋಪವೆಸಗುವ ಮೂಲಕ ಸರ್ಕಾರಕ್ಕೆ ಅಪಾರ ಆರ್ಥಿಕ ನಷ್ಟ ಉಂಟುಮಾಡಿದ್ದು ಹಾಗೂ ಕರಾರಿನಂತೆ, ಕ್ರಮ ಜರುಗಿಸದೆ, ಕರಾರಿನಲ್ಲಿನ ಷರತ್ತನ್ನು ಉದ್ದೇಶಪೂರ್ವಕವಾಗಿ ಉಲ್ಲಂಘಿಸಿದ ಆರೋಪಕ್ಕಾಗಿ ಶ್ರೀ ಹೆಚ್.ಕೆ.ಹೊರ್ತಿಕರ್, ನಿವೃತ್ತ ಮುಖ್ಯ ಇಂಜಿನಿಯರ್ ಇವರಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ:16.06.05ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ:23.06.05ರಲ್ಲಿ ಉತ್ತರ ಸಲ್ಲಿಸಿದ ಆರೋಪಿತ ಅಧಿಕಾರಿಯು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 78 ಎಸ್‌ಇಎನ್ 05 ಬೆಂಗಳೂರು ದಿನಾಂಕ: 12ನೇ ಸೆಪ್ಟೆಂಬರ್ 2006

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಪ್ರೊ.ಎಸ್.ಇಂದುಧರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 16 ಸೇಇವಿ 05 ದಿನಾಂಕ:23.08.2005 ರನ್ವಯ ರೂ.6,000/- (ಆರು ಸಾವಿರ ರೂಪಾಯಿಗಳು) ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ದಿನಾಂಕ: 4.3.2002 ರಂತೆ ರೂ.1000/- (ಒಂದು ಸಾವಿರ ರೂಪಾಯಿಗಳು) ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಅಧೀಕ್ಷಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವೃತ್ತ, ಕೆ.ಆರ್.ಸರ್ಕಲ್, ಬೆಂಗಳೂರು ರವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಮಂಡನಾಧಿಕಾರಿಯವರು ಕ್ರಮ ಕೈಗೊಳ್ಳುವುದು. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಕೆ. ರಘುರಾಮ್ ಭಂಡಾರಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

ಪಿ.ಆರ್. 1375

## LAW, JUSTICE AND HUMAN RIGHTS SECRETARIAT

**Subject:** Implementation of the recommandations of the First National Judicial Pay Commission with regard to Pay and allowance reg.

**Read:**
1) G.O.No. LAW 124 LAC 1997 dated: 17.11.2004.
2) G.O.No. LAW 262 LAC 2006, dated: 21.04.2006
3) Judgement of Hon'ble Supreme court of India dated: 06.12.2005 in All India Judges Association Vs Union of India and others.

**PREAMBLE:**

In G.O. read at (1) above, the Judicial officers were sanctioned Robe allowance of Rs.5000.00, once in five years, with a prospective effect. Similarly, in G.O. read at (2) above, the retired judicial officers were sanctioned Medical allowances of Rs.100.00 per month, with effect 01.11.1999. However the benefit was not extended to the serving judicial officers. As per the judgement of Hon'ble Supreme Court judgement dated 06.12.2005 these benefits will have to be granted with effect from 01.11.1999.

After examining the matter, following orders are issued.

**GOVERNMENT ORDER No. LAW 124 LAC 1997, Bangalore, Dated: 30th August 2006**

In partial modification of G.O. dated: 17.11.2004 referred to above sanction is accorded to pay the Robe allowance of Rs.5000.00 (Rupees five thousand only) once in five years and Medical allowances of Rs.100.00 (Rupees one hundred only) per month to the serving judicial officers with effect from 01.11.1999.

This issues with the concurrence of Finance Department vide note no. FD 522/Ser-2/2006, dated: 16.08.2006.

By Order and in the name of the Governor of Karnataka,
**GANGANARASAIAH**
Under Secretary to Government (Admn-I),
Law, Justice and Human Rights Department.

P.R. 1329